ಕರ್ನಾಟಕ ವಿಧಾನ ಪರಿಷತ್ತು

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 16
ಸದಸ್ಯರ ಹೆಸರು : ಶ್ರೀ ಯು.ಬಿ.ವೆಂಕಟೇಶ್ (ನಾಮನಿರ್ದೇಶನ ಹೊಂದಿದವರು)
ಉತ್ತರಿಸಬೇಕಾದ ದಿನಾಂಕ : 24.09.2020
ಉತ್ತರಿಸಬೇಕಾದ ಸಚಿವರು : ಮಾನ್ಯ ಮುಖ್ಯಮಂತ್ರಿರವರು

| ಕ್ರಮ ಸಂಖ್ಯೆ | ಪ್ರಶ್ನೆ | ಉತ್ತರ |
|---|---|---|
| ಅ) | ಬೆಂಗಳೂರು ನಗರದಲ್ಲಿ ವಸತಿ ಉದ್ದೇಶಕ್ಕೆ ನಿರ್ಮಾಣಗೊಂಡ ಬಡಾವಣೆಗಳು ವಸತಿಯೇತರ ಬಡಾವಣೆಗಳಾಗಿ ಪರಿವರ್ತನೆಗೊಂಡಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; ಬಂದಿದ್ದಲ್ಲಿ, ಆ ಬಡಾವಣೆಗಳು ಯಾವುವು? | ಬೆಂಗಳೂರು ಅಭಿವೃದ್ಧಿ ಪ್ರಾಧಿಕಾರದ ವ್ಯಾಪ್ತಿಯಲ್ಲಿ ನಿರ್ಮಾಣವಾಗಿರುವ ವಸತಿ ಬಡಾವಣೆಗಳು ಸಂಪೂರ್ಣವಾಗಿ ವಸತಿಯೇತರ ಬಡಾವಣೆಗಳಾಗಿ ಪರಿವರ್ತನೆಗೊಂಡಿರುವುದಿಲ್ಲ. RMP-2015 ರ ವಲಯ ನಿಯಮಾವಳಿಯಲ್ಲಿ ರಿಂಗ್-1 ಮತ್ತು ರಿಂಗ್-2 ರಲ್ಲಿ ವಸತಿ (ಮುಖ್ಯ) ಹಾಗೂ ವಸತಿ (ಮಿಶ್ರ) ವಲಯಗಳಲ್ಲಿ ರಸ್ತೆ ಅಗಲ 40* ಗಿಂತ ಹೆಚ್ಚಿದ್ದಲ್ಲಿ ಕಟ್ಟಡದ ವಿಸ್ತೀರ್ಣದಲ್ಲಿ ಶೇ.20 ಅಥವಾ 50 ಚ.ಮೀ ಯಾವುದೂ ಹೆಚ್ಚು ಇದೆಯೋ ಅದನ್ನು ಬಳಸಲು ಅವಕಾಶ ಕಲ್ಪಿಸಲಾಗಿತ್ತು. ಅದರಂತೆ ವಸತಿ ಬಡಾವಣೆಯಲ್ಲಿನ ಕೆಲವು ನಿವೇಶನಗಳಲ್ಲಿ ವಸತಿಯೇತರ ಕಟ್ಟಡಗಳು ನಿಯಮದಂತೆ ಬಂದಿರುವುದು ಗಮನಕ್ಕೆ ಬಂದಿರುತ್ತದೆ. ಇಂತಹ ವಸತಿಯೇತರ ಕಟ್ಟಡಗಳನ್ನು ನಿಯಂತ್ರಿಸುವ ಸಂಬಂಧ ಸರ್ಕಾರದಿಂದ ದಿನಾಂಕ.20.03.2015 ರ ಅಧಿಸೂಚನೆಯಲ್ಲಿ ವಲಯ ನಿಯಮಾವಳಿಗೆ ತಿದ್ದುಪಡಿ ತಂದಿದ್ದು, ಅದರಂತೆ ರಸ್ತೆಯ ಅಗಲ 40* ಗಳಿಗಿಂತ ಹೆಚ್ಚಿದ್ದಲ್ಲಿ ಕಟ್ಟಡ ವಿಸ್ತೀರ್ಣದಲ್ಲಿ ಶೇ.20 ಅಥವಾ 50 ಚ.ಮೀ. ಯಾವುದು ಕಡಿಮೆ ಇದೆಯೋ ಅದನ್ನು ಬಳಸಲು ಅವಕಾಶ ಕಲ್ಪಿಸಿದೆ. ಇದರಿಂದ ವಸತಿ ವಲಯದಲ್ಲಿ ವಸತಿಯೇತರ ಚಟುವಟಿಕೆಗಳು ನಿಯಂತ್ರಣಗೊಳ್ಳುತ್ತವೆ. |
| ಆ) | ಈ ರೀತಿ ವಸತಿಯಿಂದ ವಸತಿಯೇತರಕ್ಕೆ ಪರಿವರ್ತನೆಗೊಂಡ ಸಂದರ್ಭದಲ್ಲಿ ಸರ್ಕಾರಕ್ಕೆ ಪಾವತಿಸಬೇಕಾದ ತೆರಿಗೆಯನ್ನು ವಂಚಿಸಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; ಬಂದಿದ್ದಲ್ಲಿ, ಪ್ರಕರಣಗಳ ಸಂಖ್ಯೆ ಎಷ್ಟು; | ಅನ್ವಯಿಸುವುದಿಲ್ಲ. |
| ಇ) | ಇದರಿಂದ ಸರ್ಕಾರದ ಬೊಕ್ಕಸಕ್ಕೆ ಆಗಿರುವ ಹಾನಿ ಎಷ್ಟು ಮತ್ತು ಸರ್ಕಾರ ಕೈಗೊಂಡ ಕ್ರಮಗಳೇನು? | |

ನಅಇ 25 ಬೆಂಆಸೇ 2020

(ಬಿ.ಎಸ್. ಯಡಿಯೂರಪ್ಪ)
ಮುಖ್ಯಮಂತ್ರಿಗಳು